# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ನಾಲ್ಕನೇ ಅಧಿವೇಶನ)

**ಕಾರ್ಯಕಲಾಪಗಳ ಪಟ್ಟಿ**

ಶುಕ್ರವಾರ, ದಿನಾಂಕ 25ನೇ ಜುಲೈ, 2014
(ಸಮಯ: ಬೆಳಗ್ಗೆ 10.00 ಗಂಟೆಗೆ)

----

## 1. ವಿತ್ತೀಯ ಕಾರ್ಯಕಲಾಪಗಳು

**ಶ್ರೀ ಸಿದ್ಧರಾಮಯ್ಯ (ಮುಖ್ಯಮಂತ್ರಿ) ಅವರು:-**

2014-15ನೇ ಸಾಲಿನ ಪೂರಕ ಅಂದಾಜುಗಳನ್ನು (ಮೊದಲನೇ ಕಂತು) ಮಂಡಿಸುವುದು.

## 2. ಶಾಸನ ರಚನೆ

**ವಿಧೇಯಕವನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು**

**ಕರ್ನಾಟಕ ಭೂ ಸುಧಾರಣೆಗಳ ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ) ವಿಧೇಯಕ, 2014**
**ಶ್ರೀ ವಿ. ಶ್ರೀನಿವಾಸ ಪ್ರಸಾದ್ (ಕಂದಾಯ ಸಚಿವರು)ಅವರು:-**

ಅ) 2014ನೇ ಸಾಲಿನ ಕರ್ನಾಟಕ ಭೂ ಸುಧಾರಣೆಗಳ ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;
ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

## 3. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

ಶ್ರೀಯುತರುಗಳಾದ ಜಗದೀಶ್ ಶೆಟ್ಟರ, ಎಸ್.ಸುರೇಶ್ ಕುಮಾರ್, ಗೋವಿಂದ ಎಂ.ಕಾರಜೋಳ, ವಿಶ್ವೇಶ್ವರ ಹೆಗಡೆ ಕಾಗೇರಿ ಮತ್ತು ಬಸವರಾಜ ಬೊಮ್ಮಾಯಿ ಹಾಗೂ ಇತರರು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಕೆಂಪೇಗೌಡ ಅಂತರರಾಷ್ಟ್ರೀಯ ವಿಮಾನ ನಿಲ್ದಾಣದ ಸುತ್ತಮುತ್ತಲಿನ ಪ್ರದೇಶ ಹಾಗೂ ಅರ್ಕಾವತಿ ಬಡಾವಣೆಯ ಜಮೀನನ್ನು ಡಿನೋಟಿಫಿಕೇಶನ್ ಮಾಡಿದ್ದು, ದಿನಾಂಕ: 25.11.2005ರ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿ ಅರ್ಕಾವತಿ ಪರಿಷ್ಕೃತ ಯೋಜನೆಯ ಅಧಿಸೂಚನೆ ಹೊರಡಿಸಿರುವ ಬಗ್ಗೆ ಚರ್ಚೆ.

**ಪು.ತಿ.ನೋ.,**

## 4. ವಿತ್ತೀಯ ಕಾರ್ಯಕಲಾಪಗಳು

2014-15ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಗಳ ಮೇಲೆ ಮುಂದುವರಿದ ಚರ್ಚೆ ಹಾಗೂ ಸರ್ಕಾರದ ಉತ್ತರ ಮತ್ತು ಮತಕ್ಕೆ ಹಾಕುವುದು.

| ಬೇಡಿಕೆ ಸಂಖ್ಯೆ | ಬೇಡಿಕೆಯ ಹೆಸರು |
|---|---|
| 23 | ಕಾರ್ಮಿಕ |
| 10 | ಸಮಾಜ ಕಲ್ಯಾಣ |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ |
| 25 | ಕನ್ನಡ ಮತ್ತು ಸಂಸ್ಕೃತಿ |
| 09 | ಸಹಕಾರ |
| 27 | ಕಾನೂನು |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ |
| 19 | ನಗರಾಭಿವೃದ್ಧಿ |
| 16 | ವಸತಿ |
| 06 | ಮೂಲಭೂತ ಸೌಕರ್ಯಗಳ ಅಭಿವೃದ್ಧಿ |
| 05 | ಒಳಾಡಳಿತ ಮತ್ತು ಸಾರಿಗೆ |
| 26 | ಯೋಜನೆ, ವಿಜ್ಞಾನ ಮತ್ತು ತಂತ್ರಜ್ಞಾನ |
| 15 | ಮಾಹಿತಿ ತಂತ್ರಜ್ಞಾನ |
| 03 | ಆರ್ಥಿಕ |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ |
| 18 | ವಾಣಿಜ್ಯ ಮತ್ತು ಕೈಗಾರಿಕೆ |

## 5. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. ಶ್ರೀಯುತರುಗಳಾದ ಜಗದೀಶ್ ಶೆಟ್ಟರ, ಆರ್. ಅಶೋಕ್, ವಿಶ್ವೇಶ್ವರ ಹೆಗಡೆ ಕಾಗೇರಿ, ಬಸವರಾಜ ಬೊಮ್ಮಾಯಿ ಮತ್ತು ಗೋವಿಂದ ಎಂ.ಕಾರಜೋಳ ಹಾಗೂ ಇತರರು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗಗಳು ಹಾಗೂ ಕೊಳಚೆ ನಿವಾಸಿಗಳಿಗೆ ರಾಜ್ಯ ಸರ್ಕಾರದಿಂದ ವಿವಿಧ ಯೋಜನೆಗಳಲ್ಲಿ ಆಗುತ್ತಿರುವ ಅನ್ಯಾಯ ಹಾಗೂ ಹಣ ಬಿಡುಗಡೆಯಲ್ಲಿ ಆಗುತ್ತಿರುವ ವಿಳಂಬದ ಬಗ್ಗೆ ಚರ್ಚೆ.

**ಮು.ತಿ.ನೋ.,**

2. ಶ್ರೀಯುತರುಗಳಾದ ಹೆಚ್.ಡಿ.ಕುಮಾರಸ್ವಾಮಿ, ಜಿ.ಟಿ.ದೇವೇಗೌಡ, ವೈ.ಎಸ್.ವಿ. ದತ್ತ, ಕೆ.ಎಂ.ಶಿವಲಿಂಗೇಗೌಡ ಮತ್ತು ಎ.ಬಿ. ರಮೇಶ್ ಬಂಡಿಸಿದ್ದೇಗೌಡ ಮತ್ತು ಇತರರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಹಾಗೂ ಸುತ್ತಮುತ್ತಲು ಇರುವ ಹಲವಾರು ಕೋಟಿ ರೂಪಾಯಿಗಳ ಬೆಲೆ ಬಾಳುವ ಸರ್ಕಾರಿ ಕೆರೆಗಳನ್ನು ಒತ್ತುವರಿ ಮಾಡಿರುವುದನ್ನು ತೆರವುಗೊಳಿಸಲು ಸರ್ಕಾರ ವಿಫಲಗೊಂಡಿರುವ ಬಗ್ಗೆ ಚರ್ಚೆ.

## 6 . ಪ್ರಶ್ನೋತ್ತರ

**ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಇಪ್ಪತ್ತೈದನೇ ಪಟ್ಟಿ**

**ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಇಪ್ಪತ್ತೈದನೇ ಪಟ್ಟಿ**

## 7. ಅಧಿಕೃತ ನಿರ್ಣಯ

**ಶ್ರೀ ಟಿ.ಬಿ. ಜಯಚಂದ್ರ, ಮಾನ್ಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು ಹಾಗೂ ಸಂಸದೀಯ ವ್ಯವಹಾರಗಳು, ಶಾಸನ ರಚನೆ ಮತ್ತು ಪಶುಸಂಗೋಪನೆ ಸಚಿವರು:-**

"ಭಾರತ ಸಂವಿಧಾನದ ಭಾಗ-xvii ರ ಅಧ್ಯಾಯ iii ರಲ್ಲಿನ ಅನುಚ್ಛೇದ 348(2)ರ ಮೇರೆಗೆ ಕರ್ನಾಟಕ ರಾಜ್ಯ ಉಚ್ಛ ನ್ಯಾಯಾಲಯದಲ್ಲಿನ ನಡವಳಿಕೆಗಳನ್ನು ರಾಜ್ಯದ ಅಧಿಕೃತ ಭಾಷೆಯಾದ ಕನ್ನಡದಲ್ಲಿ ನಡೆಸಲು ಅನುವಾಗುವಂತೆ ರಾಜ್ಯ ಘನತೆವೆತ್ತ ರಾಜ್ಯಪಾಲರು, ಘನತೆವೆತ್ತ ರಾಷ್ಟ್ರಪತಿಗಳ ಪೂರ್ವಾನುಮತಿ ಪಡೆಯಬೇಕೆಂದು ಈ ಸದನವು ಸರ್ವಾನುಮತದಿಂದ ಒತ್ತಾಯಿಸುವುದು".

## 8. ಖಾಸಗಿ ಸದಸ್ಯರ ಕಾರ್ಯಕಲಾಪಗಳು

*1. ಶ್ರೀ ಪಿ.ಎಂ. ನರೇಂದ್ರಸ್ವಾಮಿ ಹಾಗೂ ಇತರರು ಕೆಳಕಂಡ ನಿರ್ಣಯವನ್ನು ಮಂಡಿಸುವುದು.*

"ಇಡೀ ರಾಜ್ಯದಲ್ಲಿ ಮದ್ಯವನ್ನು ಮಾರುವುದಕ್ಕಾಗಿ ಅಬಕಾರಿ ಇಲಾಖೆಯು ಸಿ.ಎಲ್-2 ಪರವಾನಗಿಯನ್ನು ಕೊಡುತ್ತಿದ್ದು 1991 ರಿಂದ ಮೀಸಲಾತಿ ನಿಯಮವನ್ನು ಪಾಲಿಸಿಲ್ಲದಿರುವುದರ ಜೊತೆಗೆ 2011ರ ಜನಗಣತಿ ಪ್ರಕಾರ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಜನಸಂಖ್ಯೆಯು ಕೂಡ ಹೆಚ್ಚಾಗಿರುವುದರಿಂದ ಹೆಚ್ಚಾದ ಜನಸಂಖ್ಯೆಗನುಗುಣವಾಗಿ ಮೀಸಲಾತಿ ನಿಯಮಗಳನ್ನು ಪಾಲನೆ ಮಾಡಿ 1500 ಪರವಾನಗಿಗಳನ್ನು ಈ ವರ್ಗದ ಜನಾಂಗದವರಿಗೆ ಮಂಜೂರು ಮಾಡುವ" ಕುರಿತು ಈ ಸದನವು ನಿರ್ಣಯಿಸುತ್ತದೆ.''

**ಮು.ತಿ.ನೋ.,**

2. ***ಶ್ರೀ ಪಿ.ಎಂ. ನರೇಂದ್ರ ಸ್ವಾಮಿ ಹಾಗೂ ಇತರರು ಕೆಳಕಂಡ ನಿರ್ಣಯವನ್ನು ಮಂಡಿಸುವುದು.***

"ಸರ್ಕಾರವು ಹೊರಗುತ್ತಿಗೆ, ಅರೆಸರ್ಕಾರಿ ಹಾಗೂ ಅತಿಥಿ ಹುದ್ದೆಗಳು ಎನ್ನುವ ವಿವಿಧ ಹೆಸರಿನಡಿಯಲ್ಲಿ ಹಲವಾರು ಹುದ್ದೆಗಳನ್ನು ಭರ್ತಿಮಾಡಿಕೊಳ್ಳುತ್ತಿದ್ದು ಇದು ಸಂವಿಧಾನ ಬಾಹಿರವಾಗಿರುತ್ತದೆ. 45 ದಿವಸಗಳಿಗಿಂತಲೂ ಹೆಚ್ಚಿನ ಅವಧಿಗೆ ತುಂಬಿಕೊಳ್ಳುವ ಯಾವುದೇ ರೀತಿಯ ನೇಮಕಾತಿಯಲ್ಲಿಯೂ ಮೀಸಲಾತಿ ನಿಯಮವನ್ನು ಸಂವಿಧಾನದ ಪ್ರಕಾರ ಪಾಲಿಸಬೇಕಾಗುತ್ತದೆ. ಆದುದರಿಂದ ಸರ್ಕಾರವು ಹೊರಗುತ್ತಿಗೆ ಅರೆಸರ್ಕಾರಿ ಹಾಗೂ ಅತಿಥಿ ಹುದ್ದೆಗಳು ಎಂದು ಸರ್ಕಾರ ಹಲವಾರು ರೀತಿಯ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳುವಾಗ ಮೀಸಲಾತಿ ನಿಯಮವನ್ನು ಚಾಚೂ ತಪ್ಪದೆ ಪಾಲಿಸಿ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡದ ಜನಾಂಗದವರಿಗೆ ನ್ಯಾಯ ಒದಗಿಸಿಕೊಡಬೇಕೆಂದು ಒತ್ತಾಯಪೂರ್ವಕವಾಗಿ ಈ ಸದನವು ನಿರ್ಣಯಿಸುತ್ತದೆ."

3. ***ಶ್ರೀ ಕೆ.ಗೋಪಾಲಯ್ಯ, ಅವರು ಕೆಳಕಂಡ ನಿರ್ಣಯವನ್ನು ಮಂಡಿಸುವುದು.***

"ಕನ್ನಡ ಅಭಿವೃದ್ಧಿ ಪ್ರಾಧಿಕಾರ 1994ರ ಕಾನೂನಿನ ಎರಡನೇ ಅಧ್ಯಾಯದಲ್ಲಿನ ಪ್ರಾಧಿಕಾರದ ಸಮಿತಿಯಲ್ಲಿ ಕೇಂದ್ರ ಸರ್ಕಾರದ ಮಹಾಲೇಖಪಾಲಕರ ಕಛೇರಿ, ಅಂಚೆ ತಂತಿ, ರೈಲ್ವೆ, ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಕೇಂದ್ರ ಸರ್ಕಾರಿ ಸ್ವಾಮ್ಯದ ಕೈಗಾರಿಕೆಗಳ ಪ್ರತಿನಿಧಿಗಳನ್ನು ನಾಮನಿರ್ದೇಶನ ಮಾಡಲು ಸೂಕ್ತ ತಿದ್ದುಪಡಿ ತರಲು ಸರ್ಕಾರವು ಅಗತ್ಯ ಕ್ರಮ ಕೈಗೊಳ್ಳುವ" ಬಗ್ಗೆ ಸದನವು ಸರ್ಕಾರವನ್ನು ಒತ್ತಾಯಿಸುತ್ತದೆ."

**ಪಿ.ಓಂಪ್ರಕಾಶ**
ಕಾರ್ಯದರ್ಶಿ

Raj N

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.
(www.kar.nic.in/kla)